ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್
ರಿಜಿಸ್ಟರ್ಡ್ ನಂ ಕೆಆರ್ ಎನ್ ಎಸ್ - 19
3ನೇ ವರ್ಷ 25ನೇ ಸಂಚಿಕೆ ಕೊಪ್ಪ 24-2-1985 ಭಾನುವಾರ ಬೆಲೆ 40 ಪೈಸೆ

## ಡಾ|| ಸತೀಶ್‌ಗೆ ಆತ್ಮೀಯ ಬೀಳ್ಕೊಡುಗೆ

ಶೃಂಗೇರಿ: ಇಲ್ಲಿನ ಸರ್ಕಾರಿ ಆಸ್ಪತ್ರೆಗೆ ವೈದ್ಯಾಧಿಕಾರಿಯಾಗಿ ಬಂದು 7 ತಿಂಗಳಲ್ಲಿ ತಾಲ್ಲೂಕಿನಾದ್ಯಂತ ಅತ್ಯಂತ ಜನಮೆಚ್ಚು ಗೆ ಗಳಿಸಿದ್ದ ಡಾ|| ಸತೀಶ್ ಉನ್ನತ ವ್ಯಾ ಸಂಗಕ್ಕಾಗಿ (ಎಂ.ಎಸ್.) ಹುಬ್ಬಳ್ಳಿಗೆ ತೆರ ಳಿದ ಸಂದರ್ಭದಲ್ಲಿ ಫೆ. 14 ರಂದು ಅವರ ಸಹೋದ್ಯೋಗಿಗಳು ಅವರಿಗೆ ಹೃದಯಸ್ಪ ರ್ಶಿ ಬೀಳ್ಕೊಡುಗೆ ಸಮಾರಂಭ ಏರ್ಪಡಿಸಿ, ಅವರ ಸಾಧನೆ, ಸಹಕಾರ, ಕಾರ್ಯತತ್ಪರತೆ ಗಳನ್ನು ಕೊಂಡಾಡಿದರು.

ಉತ್ತರವಾಗಿ ಡಾ|| ಸತೀಶ್ ಮಾತ ನಾಡಿ, "ಶೃಂಗೇರಿಗೆ ಬಂದನಂತರವೇ ಜನ ಸೇವೆ ಆರೋಗ್ಯ ಇಲಾಖೆಯ ಕರ್ತವ್ಯಕ್ಕೆ ಎ ಷ್ಟಿದೆ ಎಂಬುದು ನನಗೆ ಅರ್ಥವಾಯಿತು. ನನ್ನ ಅಲ್ಪಸ್ವಲ್ಪ ಕರ್ತವ್ಯಕ್ಕೆ ಇಲ್ಲಿನ ಜನ ಬ ಹಳ ಆತ್ಮೀಯತೆ, ಗೌರವ ತೋರಿಸಿದ್ದಾರೆ. ಸಾರ್ವಜನಿಕರ ಜೊತೆ ತ್ಯಾಗಮಯಾಗಿ ಸೇವೆ ಸಲ್ಲಿ ಸಿ, ನನ್ನ ಕರ್ತವ್ಯವನ್ನು ಕ್ರಮವಾಗಿ ನಿ ರ್ವಹಿಸಿದರೆ ಸಾಕು. ನನ್ನ ಯಶಸ್ಸಿಗೆ ಸ ಹೋದ್ಯೋಗಿಗಳಾದ ನೀವುಗಳೇ ಕಾರಣ" ಎಂದು ಗದ್ಗದಿತರಾಗಿ ನುಡಿದರು.

ಆಸ್ಪತ್ರೆಗೆ ಬಂದಿದ್ದ ಕೆಲವು ರೋಗಿಗಳು, ಅವರ ಕಡೆಯವರು, "ಇನ್ನೊಮ್ಮೆ ಶೃಂಗೇ ರಿಗೇ ಬನ್ನಿ" ಎಂದು ಕಣ್ಣು ಮಂಜು ಮಾ ಡಿಕೊಂಡು ಹೇಳುತ್ತಿದ್ದ ಹೃದಯಸ್ಪರ್ಶಿ ಸ ನ್ನಿವೇಶ ಡಾ|| ಸತೀಶರ ಕಳಂಕರಹಿತ ಜನ ಪ್ರಿಯತೆಯ ದ್ಯೋತಕವಾಗಿತ್ತು.

### ಬಿ. ಎಸ್. ವಿಶ್ವನಾಥ್ ಹೊಸ ವೈದ್ಯಾಧಿಕಾರಿ

ಈ ಆಸ್ಪತ್ರೆಗೆ ಹೊಸ ವೈದ್ಯಾಧಿಕಾರಿ ಯಾಗಿ ಬಿ. ಎಸ್. ವಿಶ್ವನಾಥ್ ಎಂಬವರು ನೇಮಕವಾಗಿದ್ದು, ಇವರು ವೈದ್ಯಕೀಯದ ಸ್ನಾತಕೋತ್ತರ ಪದವೀಧರರೆಂದು ತಿಳಿದು ಬಂದಿದೆ.

## ಚುನಾವಣೆ: ಮೇಲ್ಗೈ ಯಾರಿಗೆ?

ಚುನಾವಣೆ ಹತ್ತಿರ ಬಂದಂತೆ, ಮೇಲುಗೈ ಸಾಧಿಸಲು ಜನತಾ, ಕಾಂಗ್ರೆಸ್ (ಐ), ಬಿ.ಜೆ.ಪಿ.–ಮೂರೂ ಪಕ್ಷಗಳೂ ಭಗೀರಥ ಪ್ರಯತ್ನ ನಡೆಸಿವೆಯಾದರೂ ನಿಜವಾದ ಮೇಲುಗೈ ಜನತಾ ಮತ್ತು ಕಾಂಗ್ರೆಗಳಲ್ಲೇ ಅದಲು ಬದಲಾಗುತ್ತಿರು ವಂತೆ ತೋರುತ್ತಿದೆ.

ಗೆಲ್ಲುವ ಲೆಕ್ಕಾಚಾರವನ್ನು ಮೂರೂ ಪಕ್ಷಗಳೂ ಹಾಕುತ್ತಿವೆಯಾದರೂ, ಈವ ರೆಗೆ ಕಾಂಗ್ರೆ ಮೇಲುಗೈ ಪಡೆದಿದ್ದುದು ಈ ಚಿನ ವರದಿಗಳಂತೆ ಜನತಾ ಮೇಲುಗೈ ಪಡೆ ದಿರುವ ಹಾಗೆ ಕಾಣುತ್ತಿದೆ.

ಇತ್ತ, ಕಾರು-ಜೀಪುಗಳಲ್ಲಿ ಜೋರಿನಿಂದ ಓಡಾಡುತ್ತಾ ಧ್ವನಿವರ್ಧಕವನ್ನು ಕರ್ಕಶ ವಾಗಿ ಕಿರುಚಾಡಿಸಿದಷ್ಟೂ ಹೆಚ್ಚೆಚ್ಚು ಜನ ಮತದಾರರು ತಮಗೆ ಒಲಿಯುವರೆಂದು ಜ ನತಾ–ಕಾಂಗ್ರೆಗಳು ನಂಬಿರುವಂತೆ ಕಾಣು ತ್ತಿದೆ. ಜನರ ನೆಮ್ಮದಿ, ಆರೋಗ್ಯ ಕೆಡಿಸುವ ಈ ಅಸಹ್ಯ ಹುಚ್ಚಾಟದಲ್ಲಿ ಮಾತ್ರ ಜನತಾ ಪಡೆಯೇ 'ಮೇಲುಗೈ' ಪಡೆದಿರುವಂತೆ ಕಾ ಣುತ್ತಿದೆ–ಕೊಪ್ಪದ ಮಟ್ಟಿಗಾದರೂ.

ಶಂಕರನಾರಾಯಣ ಕಕ್ಕಾಗಿ ಫೆ. 26 ರಂದು ಅನಂತನಾಗ್, ಜನವರಿ 27ರಂದು ರಾಮಕೃಷ್ಣ ಹೆಗಡೆಯೂ ಬರಲಿದ್ದಾರೆ.

ಜನತಾ ಅಭ್ಯರ್ಥಿ ಪರ ಚುನಾವಣಾ ಪ್ರ



### ಶಿವಮೊಗ್ಗ ಅಡಿಕೆ ಪೇಟೆ

ತಾರೀಕು : 23-2-1985

| | |
|---|---|
| ಸರಕು: | 2709 – 3085 |
| ಬೆಟ್ಟೆ: | 2065 – 2551 |
| ಗೊರಬಲು: | 1400 – 1760 |

## ವಿದ್ಯಾರ್ಥಿಗಳೇ ನಡೆಸಿದ ಎಲ್. ಬಿ. ಎಸ್. ಮೂರ್ತಿ ಕ್ರೀಡಾ ಕೂಟ

ಶೃಂಗೇರಿ: ಪ್ರತಿ ವರ್ಷ ಇಲ್ಲಿನ ಕಾಲೇ ಜಿನಲ್ಲಿ ನಡೆಯುತ್ತಿದ್ದ ಪ್ರೊ|| ಎಲ್.ಬಿ.ಎಸ್. ಮೂರ್ತಿ ಜಿಲ್ಲಾ ಮಟ್ಟದ ಕ್ರೀಡಾಕೂಟ ವನ್ನು ಈ ವರ್ಷ ಕಾಲೇಜಿನವರು ನಡೆಸಲು ನಿರಾಕರಿಸಿದ್ದರಿಂದ ಕಾಲೇಜಿನ ಹಿಂದಿನ ಮ ತ್ತು ಈಗಿನ ವಿದ್ಯಾರ್ಥಿಗಳೇ ಕೂಡಿ ಕೂಟ ವನ್ನು ಯಶಸ್ವಿಯಾಗಿ ನಡೆಸಿದರು.

ಬಾಲ್ ಬ್ಯಾಡ್ಮಿಂಟನ್ ಮತ್ತು ವಾಲಿ ಬಾಲ್‌ನಲ್ಲಿ ಒಟ್ಟು 34 ಟೀಮು ಗಳು ಭಾಗವಹಿಸಿದ್ದವು.

## ಬೆಲೆ ಇಳಿತ

...ಸರ್ಕಾರಿ ಡಿಪೋದಿಂದ ...ಡೆಯು ಬೆಲೆ ಟನ್ನಿಗೆ ...ನ್ನು ಫೆ. 22 ರಿಂದ ...ಗೆ ಇಳಿಸಿರುವುದಾಗಿ ...ಧಿಕಾರಿ ವಿನಯ್ ...ಳಿಸಿದ್ದಾರೆ.

...ನಾಗಾಣಿಕೆಯ ...ಮಾಡಿಕೊಂಡ ...ಗಿ ಈ 39 ...ಗದೆಯೆಂದು

## ಬಾಲ್ ಬ್ಯಾಡ್ಮಿಂಟನ್ ಪಂದ್ಯಾವಳಿ

ಕೊಪ್ಪ: ಇಲ್ಲಿಗೆ ಸಮೀಪದ ಗಡಿಕಲ್ಲಿನಲ್ಲಿ (ಹಿರೇಕೊಡಿಗೆ) ಮಾರ್ಚ್ 9 ಮತ್ತು 10 ರಂದು ಚಿಕ್ಕಮಗಳೂರು, ಶಿವಮೊಗ್ಗ ಮ ತ್ತು ದ.ಕ. ಜಿಲ್ಲಾಮಟ್ಟದ ಬಾಲ್ ಬ್ಯಾ ಡ್ಮಿಂಟನ್ ಪಂದ್ಯಾವಳಿಯನ್ನು ಸ್ಥಳೀ ಯ ಆಂಜನೇಯ ಯುವಕ ಸಂಘ ಏರ್ಪಡಿ ಸಿದೆ. ಆಸಕ್ತಿಯುಳ್ಳ ತಂಡಗಳು 28-2-85 ರೊಳಗೆ 15 ರೂ. ಶುಲ್ಕದೊಂದಿಗೆ ಪ್ರವೇ ಶ ಪತ್ರಗಳನ್ನು ಕಳಿಸಲು ಕೋರಲಾಗಿದೆ.

...ಸದಸ್ಯರಾಗಿದ್ದ

## ...ಅಹಮದ್ ಇನ್ನಿಲ್ಲ

...ಲ ಹೆಗ್ಡೆ)

...ನ, ಪುರಸಭೆಯಿಂದ ತನಗೆ ಬರುವ ತಿಂ ...0 ರೂ. ಗಳನ್ನು ಆ ಕುಟುಂಬಕ್ಕೇ ...ದ್ದರು.

...ಯಣ ಅವರು ಸಾವಪ್ಪಿದಾಗ, ...ನರುಗಳ ಪಾಡೂ ಇದೇ ಎಂದು ...ದು ಸಂಘಟನೆಯ ಅಗತ್ಯ ಕಂ ...ಅದಕ್ಕಾಗಿ ರಫೀಕ್ ಎಲ್ಲ ...ದ್ದರು. ಈ ಸಂಘಟನೆ ಕಟ್ಟು ...ಯಾರು ಹೊರುತ್ತಾರೋ ...ದು.



# ಅಸಾಮಾನ್ಯ ಪ್ರತಿಭೆ-ಉಪಯುಕ್ತ ಅವಕಾಶ

ಮೇಗೂರು ಯುವಜನಮೇಳ
ಸಮೀಕ್ಷೆ :
ನಮ್ಮ ವಿಶೇಷ ಪ್ರತಿನಿಧಿಯಿಂದ

ಹಳ್ಳಿಗಾಡಿನಲ್ಲಿ ಪ್ರಕಾಶಗೊಳ್ಳದೆ ಮೂಲೆ ಗುಂಪಾಗಿರುವ ಕಲೆಯ ಪ್ರತಿಭೆ ಬೆಳಕಿಗೆ ಬರಲು, ಅಭಿವೃದ್ಧಿಗೊಳ್ಳಲು ಸರಿಯಾದ ಅವಕಾಶ ಕಲ್ಪಿಸುವ ದೃಷ್ಟಿಯಿಂದ ತಾಲ್ಲೂಕು ಮಟ್ಟದಿಂದ ಹಿಡಿದು ಜಿಲ್ಲಾ, ವಿಭಾಗ ಮತ್ತು ರಾಜ್ಯ ಮಟ್ಟದವರೆಗೆ ಯುವಜನ ಮೇಳಗಳು ವರ್ಷಕ್ಕೊಮ್ಮೆ ನಡೆಯುತ್ತವೆ. ಗ್ರಾಮಾಂತರದ ಯುವಜನ ಸಂಘಗಳು ಮಾತ್ರ ಇವುಗಳಲ್ಲಿ ಪಾಲ್ಗೊಳ್ಳಬಹುದು.

ಇಂಥದೊಂದು ಅವಕಾಶ ಕಲ್ಪಿಸಿರುವುದು ಎಷ್ಟು ಉಪಯುಕ್ತವಾದ ಮತ್ತು ಅತ್ಯಗತ್ಯವಾಗಿತ್ತು ಎಂಬುದಕ್ಕೆ ಮೇಗೂರಿನಲ್ಲಿ ಫೆ. 10 ಮತ್ತು 11 ರಂದು ನಡೆದ ಕೊಪ್ಪ ತಾ|| ಮಟ್ಟದ ಯುವಜನ ಮೇಳದಲ್ಲಿ ಹೊರಹೊಮ್ಮಿದ ವೈವಿಧ್ಯಮಯವಾದ ಪ್ರತಿಭೆಯ ಸಂಪತ್ತು ಸಾಕ್ಷಿ ಎಂದರೆ ಉತ್ಪ್ರೇಕ್ಷೆಯಾಗಲಾರದು. ಸರಿಯಾದ ರೀತಿ ಪುಟಕೊಟ್ಟರೆ ಇಲ್ಲಿನ ಕೆಲವರಲ್ಲಿರುವ ಪ್ರತಿಭೆ ಅಸಾಮಾನ್ಯ ಮಟ್ಟಕ್ಕೇರುವುದರಲ್ಲಿ ಅನುಮಾನವಿಲ್ಲ.

ಆದ್ದರಿಂದ ಪ್ರತಿಭೆಗೆ ಪುಟ ಕೊಡುವುದರ ಜೊತೆಗೆ ಇಲ್ಲಿನ ತಂಡಗಳು ತಿದ್ದಿಕೊಳ್ಳಬೇಕಾದ ದೋಷ-ಅಸಂಗತಗಳೂ ಹಲವಿರುವುದರಿಂದ ಈ ಸಮೀಕ್ಷೆಯಲ್ಲಿ ಈ ದಿಕ್ಕಿಗೆ ಹೆಚ್ಚು ಒತ್ತು ಕೊಟ್ಟಿದೆ. ಈ ಮೇಳದ ವಿವಿಧ ಕಾರ್ಯಕ್ರಮಗಳನ್ನು ವಿಮರ್ಶೆಗೆ ಒಡ್ಡಿದೆ. (ಬೆಳಿಗ್ಗೆ ಶುರುವಾಗಬೇಕಾದ ಉದ್ಘಾಟನಾ ಕಾರ್ಯಕ್ರಮವೇ ಮಧ್ಯಾಹ್ನ 2.45 ಕ್ಕೆ ಪ್ರಾರಂಭವಾಯಿತು. ಸ್ಪರ್ಧೆಗಳು 4.30 ಕ್ಕೆ ಪ್ರಾರಂಭವಾದವು. ಸ್ಪರ್ಧೆಗಳ ಸಂಖ್ಯೆ ಕಡಿಮೆಯಿದ್ದುದರಿಂದ ಮಾತ್ರ ಸರಿಯಾದ ಸಮಯಕ್ಕೆ ಸ್ಪರ್ಧೆಗಳೆಲ್ಲ ಮುಗಿದವು.)

### ಜಾನಪದ ನೃತ್ಯ

ಹೆಚ್ಚಿನ ತಂಡಗಳವರು ಜಾನಪದ ನೃತ್ಯವೆಂದರೆ, ಛದ್ಮವೇಷ ಎಂದು ತಿಳಿದು, ವಿವಿಧ ವೇಷ ಧರಿಸಿ, ವೇಷಕ್ಕೆ ಸಂಬಂಧವಿಲ್ಲದೆ ಕುಣಿದರು. ಎರಡು ಮೂರು ತಂಡಗಳು ಮಾತ್ರ, ಜಾನಪದ ಜೀವನದ ಕೆಲಮಗ್ಗುಲುಗಳನ್ನು ನೃತ್ಯದಲ್ಲಿ ತೋರಿಸುವಲ್ಲಿ ಯಶಸ್ವಿಯಾದವು. ಮುಖ್ಯವಾಗಿ ಹೆಸರಿಸಬಹುದಾದ್ದೆಂದರೆ ಹುಲಿಗರಡಿ ಯುವತಿ ಮಂಡಲಿ ಹಾಗೂ ಹಿರೇಗದ್ದೆ ಯುವಕ ಮಂಡಲ.

### ಕೋಲಾಟ

ಜಾನಪದ ನೃತ್ಯದ ಬಗ್ಗೆ ಹೇಳಿದ ಮಾತನ್ನೇ ಇದರ ಬಗ್ಗೆಯೂ ಹೇಳಬಹುದು. ನೀರಸ ಏಕತಾನತೆಯ ಪ್ರದರ್ಶನ ನೀಡಿದ ತಂಡಗಳೇ ಹೆಚ್ಚು. ವಿವಿಧ ರೀತಿಯ ವಿನ್ಯಾಸಗಳನ್ನು ಪ್ರದರ್ಶಿಸಿದ ಹಿರೇಗದ್ದೆ ಯುವಕ ಮಂಡಲದ ಕೋಲಾಟ ಮಾತ್ರ ಉತ್ತಮವಾಗಿತ್ತು.

### ನಾಟಕಗಳು

ಪ್ರದರ್ಶನವಾದ ಏಳು ನಾಟಕಗಳಲ್ಲಿ (ಯುವಕರ 5, ಯುವತಿಯರ 2) ಯಾವುದೂ ಉತ್ತಮ ಅನ್ನುವ ಮಟ್ಟಕ್ಕೇರಲಿಲ್ಲ. ಅರೆಹಳ್ಳಿ, ಹುಲಿಗರಡಿ, ಸರ್ವೋದಯ ಯುವಕ ಸಂಘಗಳ ಪ್ರದರ್ಶನಗಳು ಸಾಮಾನ್ಯ ಮಟ್ಟದಲ್ಲಿದ್ದರೆ, ಇನ್ನುಳಿದವು ಕೇವಲ ಕಳಪೆ ಪ್ರದರ್ಶನಗಳು.

ಪ್ರಥಮ ಬಹುಮಾನ ಗಳಿಸಿದ ಅರೆಹಳ್ಳಿ ಯುವಕ ಮಂಡಲದವರ ನಾಟಕ 'ವರ್ತಮಾನ' ಯುವಜನರ ಸಮಸ್ಯೆಯನ್ನು ಒಳಗೊಂಡಿತ್ತು. ಇಂದಿನ ಯುವ ಜನಾಂಗದ ಉತ್ಕರ್ಷಕ್ಕೆ ರಾಜಕಾರಣಿಗಳು ಯಾವ ರೀತಿ ತೊಡರುಗಾಲೊಡ್ಡುತ್ತಾರೆ, ಯಾವ ರೀತಿ ಯುವಕರು ಹೇಡಿಗಳಾಗುತ್ತಾರೆ ಎನ್ನುವುದು ಇದರ ವಸ್ತು. ಅಂಥ ಉತ್ತಮ ನಾಟಕವಲ್ಲದಿದ್ದರೂ ಬೇರೆ ನಾಟಕಗಳೊಂದಿಗೆ ಹೋಲಿಸಿದಾಗ, ಪರವಾಗಿಲ್ಲ ಎನ್ನಿಸುವಂತಿದ್ದುದರಿಂದ ಪ್ರಥಮ ಬಹುಮಾನ ಗಳಿಸಿತು. ನಾಟಕದ ಮುಖ್ಯ ಪಾತ್ರಧಾರಿಯ (ಕುಡುಕ) ಅಭಿನಯ ಹಿರಣ್ಣಯ್ಯನ ಅನುಕರಣೆಯಂತೆ ಕಾಣುತ್ತಿತ್ತು. ಅನುಕರಣೆಯನ್ನು ಬಿಟ್ಟು ಸ್ವಂತಿಕೆಯನ್ನು ರೂಢಿಸಿಕೊಂಡರೆ, ಈತ ಒಬ್ಬ ಭರವಸೆ ಇಡಬಲ್ಲ ಕಲಾವಿದ.

ದ್ವಿತೀಯ ಬಹುಮಾನ ಗಳಿಸಿದ ಹುಲಿಗರಡಿ ತಂಡದ ನಾಟಕ ವರದಕ್ಷಿಣೆಯ ಸಮಸ್ಯೆಯನ್ನು ಕುರಿತದ್ದು. ಸಮಸ್ಯೆಯ ಬಗ್ಗೆ ಹೊಸತೇನನ್ನೂ ಹೇಳದಿದ್ದರೂ, ನಟರ ಸಹಜ ಅಭಿನಯ ನಾಟಕಕ್ಕೆ ದ್ವಿತೀಯ ಬಹುಮಾನವನ್ನು ತಂದು ಕೊಟ್ಟಿತು.

ಈ ಎರಡು ನಾಟಕಗಳ ಹೊರತಾಗಿ, ಹೆಸರಿಸಬಹುದಾದ ಇನ್ನೊಂದು ನಾಟಕವೆಂದರೆ, ಸರ್ವೋದಯ ಯುವಕ ಸಂಘದವರ 'ಪೋಲೀಸರಿದ್ದಾರೆ, ಎಚ್ಚರಿಕೆ'. ಕೃತಿಯ ಬಗ್ಗೆ ಹೇಳುವುದಾದರೆ, ಮೇಲಿನ ಎರಡು ನಾಟಕಗಳಿಗಿಂತಲೂ ಈ ಕೃತಿ ಶ್ರೇಷ್ಠವಾದದ್ದು. ಆದರೆ ಪ್ರದರ್ಶನ ಸೋಲುವುದಕ್ಕೆ ಕಾರಣ, ನಟರು ಮಾತು ಮರೆತು ತಡಕಾಡಿದ್ದು, ರಂಗವನ್ನು ತಮ್ಮ ಅಭಿನಯದಿಂದ ತುಂಬಲು ಸೋತದ್ದು. ಮೊದಲ ದೃಶ್ಯ ಚೆನ್ನಾಗಿಯೇ ಮೂಡಿಬಂದರೂ ದ್ವಿತೀಯ ದೃಶ್ಯ ಸಂಪೂರ್ಣ ಹಾಳಾಯಿತು. ಇದರಿಂದಾಗಿ ನಾಟಕ ಬಹುಮಾನ ಗಳಿಸಲು ಅಸಮರ್ಥವಾಯಿತು.

### ಭಾವಗೀತೆ, ಜಾನಪದಗೀತೆ, ಸೋಬಾನೆ ಹಾಡು, ಜೋಗುಳಹಾಡು, ಗೀಗೀಪದ

ಭಾವಗೀತೆ, ಜಾನಪದಗೀತೆಗಳಲ್ಲಿ, ಹೊಸ ಹಾಡುಗಳು ಯಾವುವೂ ಕೇಳಿಬರಲಿಲ್ಲ. ನಮ್ಮ ಯುವಜನರು ಹಾಡಿದ್ದೇ ಹಾಡುವ ಪರಿಪಾಠಕ್ಕಿಂತ ಹೊಸ ಹಾಡುಗಳನ್ನು ಹುಡುಕುವುದು ಒಳ್ಳೆಯದು.

'ಗೀಗೀ ಪದ' ಸ್ಪರ್ಧೆ ಮಲೆನಾಡಿನ ಯುವಜನ ಮೇಳದಲ್ಲಿ ತೆಗೆದು ಹಾಕುವುದೇ ಒಳ್ಳೆಯದು. ಈ ವಿಭಾಗದಲ್ಲಿ ಈ ವರ್ಷ ಭಾಗವಹಿಸಿದ್ದು ಕೇವಲ ಒಂದು ತಂಡ ಮಾತ್ರ. ಗೀಗೀಪದ ಮಲೆನಾಡ ಸಂಸ್ಕೃತಿಗೆ ಸಂಬಂಧಿಸಿದ ಕಲೆಯೇ ಅಲ್ಲ. ಸ್ಪರ್ಧೆಯಲ್ಲಿ ಭಾಗವಹಿಸಿದವರೂ, ಸಿನೆಮಾ ಹಾಡಿನ ಅನುಕರಣೆ ಮಾಡಿ ತಾವೇ ಕಟ್ಟಿದ ಹಾಡನ್ನೇ ಹಾಡಿದರು. ಗೀಗೀಪದವೆಂದರೇನು ಎಂಬುದೇ ನಮಗೆ ಪರಿಚಯವಿಲ್ಲದಿರುವಾಗ ಆ ಸ್ಪರ್ಧೆಯನ್ನು ನಡೆಸುವುದು ಅರ್ಥಹೀನ. ಅದರ ಬದಲು ಹೂವಿನಕೋಲು, ಅಂಟಿಗೆ ಪಂಟಿಗೆ, ಹಸೆಹಾಡು ಇಂಥ ಯಾವುದನ್ನಾದರೂ ಸೇರಿಸಿಕೊಳ್ಳಬಹುದು.

### ಏಕ ಪಾತ್ರಾಭಿನಯ

ಏಕ ಪಾತ್ರಾಭಿನಯ ಸ್ಪರ್ಧೆಯಲ್ಲಿ ಭಾಗವಹಿಸಿದ ಹೆಚ್ಚಿನ ಸ್ಪರ್ಧಿಗಳು, ಉದ್ದುದ್ದ ಮಾತುಗಳಿರುವ ಒಂದೊಂದೆ ಪಾತ್ರವನ್ನು ಅಭಿನಯಿಸಿ ತೋರಿಸಿದರು. ಆದರೆ ಏಕಪಾತ್ರಾಭಿನಯದಲ್ಲಿ ಒಬ್ಬಾತ ತೋರಿಸಬೇಕಾದ್ದು—ಏಕ ಕಾಲದಲ್ಲಿ ವಿಭಿನ್ನ ಪಾತ್ರಗಳನ್ನು ಅಭಿನಯಿಸುವ ಸಾಮರ್ಥ್ಯವನ್ನು. ಒಂದು ಪಾತ್ರದಿಂದ ಇನ್ನೊಂದು ಪಾತ್ರಕ್ಕೆ ಕ್ಷಣಮಾತ್ರದಲ್ಲಿ ಪ್ರವೇಶಮಾಡಿ, ವಿವಿಧ ಬಗೆಯ ಭಾವನೆಗಳನ್ನು ವ್ಯಕ್ತಪಡಿಸುವ ಪ್ರತಿಭೆಯೇ ಇಲ್ಲಿ ಮುಖ್ಯವಾದುದು. ಈ ದೃಷ್ಟಿಯಿಂದ ಈ ವಿಭಾಗದಲ್ಲಿ ಯಾರ ಪ್ರದರ್ಶನವೂ ಹೆಸರಿಸುವಂತಿರಲಿಲ್ಲ.

ಇದಲ್ಲದೆ, ಸುಗ್ಗಿಯಹಾಡು, ಲಾವಣಿಗಳು ಚೆನ್ನಾಗಿದ್ದವು. ಮೇಗೂರು ಮತ್ತು ಬಾಳಗಡಿ ತಂಡಗಳು ಪ್ರದರ್ಶಿಸಿದ ಎರಡು ಯಕ್ಷಗಾನಗಳೂ ಸಾಕಷ್ಟು ಉತ್ತಮವಾಗಿ ಮೂಡಿಬಂದವು, ಮುಖ್ಯವಾಗಿ ಜನರನ್ನು ರಂಜಿಸಿದವು.

### ಅಪೂರ್ವ ಮನರಂಜನೆ

ಒಟ್ಟಿನಲ್ಲಿ ಕಾರ್ಯಕ್ರಮಗಳು ವೈವಿಧ್ಯಮಯವಾಗಿದ್ದವು, ಲವಲವಿಕೆಯಿಂದ ಕೂಡಿದ್ದವು. ಸಂಚಾರ ವ್ಯವಸ್ಥೆ ತೀರ ದರಿದ್ರ ಸ್ಥಿತಿಯಲ್ಲಿರುವ ಮೇಗೂರಿನಂಥ ಹಳ್ಳಿಗಾಡಿನ ಜನತೆಗೆ ಒಟ್ಟಿಗೆ ಇಷ್ಟೊಂದು ಬಗೆಯ ಕಲೆಯ ರಸಾಯನ ಸವಿಯುವ ಅಪೂರ್ವ ಅವಕಾಶ ಸಿಕ್ಕಿತ್ತು. ಜನ ಇದನ್ನು ಸಂಪೂರ್ಣವಾಗಿ ಸವಿದರೆಂಬುದೂ ಕಂಡುಬರುತ್ತಿತ್ತು.

---

## ಮಾರ್ಚ್ 5 ರ ವಿಧಾನಸಭಾ ಚುನಾವಣೆ:

# ಶೃಂಗೇರಿ ಕ್ಷೇತ್ರದ ಬಗ್ಗೆ ಕೆಲವು ವಿವರಗಳು

ಮಾರ್ಚ್ 5 ರಂದು ನಡೆಯಲಿರುವ ರಾಜ್ಯ ವಿಧಾನಸಭಾ ಚುನಾವಣೆಯ ಅಂಗವಾಗಿ ಶೃಂಗೇರಿ, ಕೊಪ್ಪ, ನರಸಿಂಹರಾಜಪುರ ತಾಲ್ಲೂಕುಗಳನ್ನೊಳಗೊಂಡ 'ಶೃಂಗೇರಿ' ವಿಧಾನಸಭಾ ಕ್ಷೇತ್ರದ ಚುನಾವಣೆ ವ್ಯವಸ್ಥೆ ಭರದಿಂದ ಸಾಗಿದೆ. ಜಿಲ್ಲಾಧಿಕಾರಿಗಳ ಸ್ಥಾನೀಯ ಸಹಾಯಕರಾದ ಪಿ. ಎಂ. ಉಮಾಪತಿ ಈ ಕ್ಷೇತ್ರದ ಚುನಾವಣಾಧಿಕಾರಿಯಾಗಿದ್ದಾರೆ. ಕೊಪ್ಪ ತಹಸೀಲ್ದಾರ್ ಸಹಾಯಕ ಚುನಾವಣಾಧಿಕಾರಿಯಾಗಿದ್ದಾರೆ.

### ಮತದಾರರು, ಮತಗಟ್ಟೆಗಳು

ಶೃಂಗೇರಿ ತಾ||ನಲ್ಲಿ 17851 ಮತದಾರರು, 36 ಮತಗಟ್ಟೆಗಳು; ಕೊಪ್ಪ ತಾ|| ನಲ್ಲಿ 43841 ಮತದಾರರು, 74 ಮತಗಟ್ಟೆಗಳು, ನ. ರಾ. ಪುರ ತಾ|| ನಲ್ಲಿ 28,722 ಮತದಾರರು, 49 ಮತಗಟ್ಟೆಗಳು—ಒಟ್ಟು 90414 ಮತದಾರರಿದ್ದು 159 ಮತಗಟ್ಟೆಗಳನ್ನು ಏರ್ಪಡಿಸಲಾಗಿದೆ. ಕ್ಷೇತ್ರಾದ್ಯಂತ ಒಟ್ಟು 27 ಸೈನಿಕರ ಮತಗಳಿವೆ.

ಮುತ್ತಿನಕೊಪ್ಪದಲ್ಲಿ ಅತಿ ಹೆಚ್ಚು ಜನ (1103) ಮತದಾರರೂ, ಹೆನ್ನಂಗಿಯಲ್ಲಿ ಅತಿಕಮ್ಮಿ (110) ಮತದಾರರೂ ಇದ್ದಾರೆ. (ಎರಡೂ ನ.ರಾ. ಪುರ ತಾ|| ನಲ್ಲಿವೆ.)

ಈ ಬಾರಿ ಮತದಾನದ ಗುರುತಿನ ಇಂಕನ್ನು ಮಧ್ಯದ ಬೆರಳಿಗೆ ಹಚ್ಚಲಾಗುತ್ತದೆ.

### ಸಿಬ್ಬಂದಿ

ಪ್ರತಿ ಮತಗಟ್ಟೆಗೆ ಒಬ್ಬ ಪ್ರಿಸೈಡಿಂಗ್ ಆಫೀಸರ್ ಮತ್ತು ಮೂವರು ಪೋಲಿಂಗ್ ಆಫೀಸರುಗಳು ಇದ್ದು, 14 ಮಂದಿ ಮೇಲ್ವಿಚಾರಕ ಅಧಿಕಾರಿಗಳಿದ್ದು, ಒಟ್ಟು 1030 ಜನ ಸಿಬ್ಬಂದಿ ಚುನಾವಣಾ ಕೆಲಸದಲ್ಲಿ ನಿಯುಕ್ತರಾಗಿದ್ದಾರೆ. 35 ಜೀಪು 23 ಬಸ್ಸುಗಳನ್ನು ಒದಗಿಸಲಾಗುತ್ತದೆ.

### ಮತಗಳ ಎಣಿಕೆ

ಮತಗಳ ಎಣಿಕೆ ಕೊಪ್ಪದ ಪ್ರಥಮ ದರ್ಜೆ ಕಾಲೇಜಿನ 2 ಕೊಠಡಿಗಳಲ್ಲಿ ಮಾರ್ಚ್ 6 ರಂದು ಬೆಳಿಗ್ಗೆ 8 ಗಂಟೆಗೆ ಆರಂಭವಾಗುತ್ತದೆ. 20 ಮೇಜುಗಳಲ್ಲಿ ನಡೆಯುವ ಎಣಿಕೆಯಲ್ಲಿ 102 ಜನ ಸಿಬ್ಬಂದಿ ಪಾಲ್ಗೊಳ್ಳುತ್ತಾರೆ (ಪೋಲೀಸ್ ಸಿಬ್ಬಂದಿ ಪ್ರತ್ಯೇಕ.)

ಪ್ರತಿಯೊಬ್ಬ ಅಭ್ಯರ್ಥಿಯ ಪರವಾಗಿಯೂ ಒಂದು ಮೇಜಿಗೆ ಒಬ್ಬರಂತೆ 20 ಜನ ಏಜಂಟರಿಗೆ ಪ್ರವೇಶಾವಕಾಶವಿದೆ (ಮುಂಚಿತವಾಗಿ ಹೆಸರು ವಿಳಾಸ ಕೊಟ್ಟು ಅನುಮತಿ ಪತ್ರ ಪಡೆದಿರಬೇಕು) ಆದರೆ ಬೆಳಿಗ್ಗೆ 8 ಗಂಟೆಯಿಂದ ಸಂಜೆ 4 ಗಂಟೆಗೆ ಎಣಿಕೆ ಮುಗಿಯುವವರೆಗೆ ಒಳಗಿನಿಂದ ಯಾರೂ ಹೊರಗೆ ಬರುವಂತಿಲ್ಲ. ಜನರನ್ನು ಬದಲಿಸುವಂತಿಲ್ಲ.

### ತರಬೇತಿ

ಚುನಾವಣಾ ಸಿಬ್ಬಂದಿ ಮಾ. 4 ರ ಬೆಳಿಗ್ಗೆ 8 ಗಂಟೆಗೆ ಕೊಪ್ಪ ಪ್ರ. ದ. ಕಾಲೇಜಿನಲ್ಲಿ ಹಾಜರಿರಬೇಕು. 5 ರ ರಾತ್ರಿ ಅವರನ್ನು ಬಿಡುಗಡೆ ಮಾಡಲಾಗುತ್ತದೆ.

(3 ನೇ ಪುಟಕ್ಕೆ)

---

## ದೇವಂಗಿಯಲ್ಲಿ ರಾಜ್ಯ ಮಟ್ಟದ ಸ್ಪರ್ಧಾವಳಿ

ತೀರ್ಥಹಳ್ಳಿ: ಇಲ್ಲಿಗೆ ಸಮೀಪದ ದೇವಂಗಿಯಲ್ಲಿ 10ನೇ ವರ್ಷದ ರಾಜ್ಯ ಮಟ್ಟದ ಭಾವಗೀತೆ, ಚಿತ್ರಗೀತೆ ಮತ್ತು ಜಾನಪದ ಗೀತೆಗಳ ಗಾಯನ ಸ್ಪರ್ಧೆ ಮತ್ತು ಶಿವಮೊಗ್ಗ, ಚಿಕ್ಕಮಗಳೂರು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಮಟ್ಟದ ನಾಟಕ ಸ್ಪರ್ಧೆಯನ್ನು 1985ನೇ ಏಪ್ರಿಲ್ ತಿಂಗಳ ಎರಡನೇ ವಾರದಲ್ಲಿ ಏರ್ಪಡಿಸಲಾಗಿದೆ. ಇಚ್ಛೆಯುಳ್ಳ ಯಾವುದೇ ಸಂಘ—ಸಂಸ್ಥೆ, ಶಾಲಾ—ಕಾಲೇಜು ಮತ್ತು ಸಾರ್ವಜನಿಕರು ಸ್ಪರ್ಧಿಸಲು ಆಹ್ವಾನಿಸಲಾಗಿದೆ.

ನಾಟಕ ಸ್ಪರ್ಧೆಗೆ ಪ್ರವೇಶ ಶುಲ್ಕ 30-00ರೂ.ಗಳು. ಸಂಗೀತ ಸ್ಪರ್ಧೆಗೆ ಎಲ್ಲಾ ವಿಭಾಗಕ್ಕೆ ಒಟ್ಟಿಗೆ 2-00ರೂ.ಗಳು. ಉಚಿತ ಊಟ ವಸತಿ ಕಲ್ಪಿಸಲಾಗುವುದು.

ವಿವರಗಳಿಗೆ ಪಿ.ಆರ್. ಕವಿರಾಜ್, ಕಾರ್ಯದರ್ಶಿ, ಸಹ್ಯಾದ್ರಿ ಸಂಗ್ರಾಮ (ರಿ), ದೇವಂಗಿ ತೀರ್ಥಹಳ್ಳಿ ತಾಲ್ಲೂಕು—ಇವರನ್ನು ಖುದ್ದಾಗಿ ಯಾ ಪತ್ರವ್ಯವಹಾರದ ಮೂಲಕ ಸಂಪರ್ಕಿಸಲು ಕೋರಲಾಗಿದೆ.

## ಓದುಗರ ಪತ್ರಗಳು

### ಜನತಾ-ಕಮ್ಯುನಿಸ್ಟ್ ಪಕ್ಷಗಳಿಗೆ
# ದಲಿತ ಸಂಘರ್ಷ ಸಮಿತಿ ಬೆಂಬಲ

ಮಾರ್ಚ್ 5ರಂದು ನಡೆಯಲಿರುವ ರಾಜ್ಯ ವಿಧಾನ ಸಭಾ ಚುನಾವಣೆಯಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಸ್ಪರ್ಧಿಸುವುದಿಲ್ಲ. ಆದರೆ, ಕಾಂಗ್ರೆಸ್ (ಐ) ಮತ್ತು ಬಿಜೆಪಿ ಅಭ್ಯರ್ಥಿಗಳನ್ನು ತಿರಸ್ಕರಿಸಿ, ಜನತಾ-ಕಮ್ಯುನಿಸ್ಟ್ ಅಭ್ಯರ್ಥಿಗಳಿಗೆ ಮತ ನೀಡಿ ಬೆಂಬಲಿಸಬೇಕೆಂದು ತೀರ್ಮಾನಿಸಿದೆ.

ಬಡತನ, ಅವಮಾನಗಳಲ್ಲಿ ಬದುಕುತ್ತಿರುವ ದಲಿತರ, ಹಿಂದುಳಿದ ಜನಾಂಗಗಳ ಮತ್ತು ಅಲ್ಪಸಂಖ್ಯಾತರ ರಕ್ಷಕರೆಂದು ಗುತ್ತಿಗೆ ಹಿಡಿದು ನಿರಂತರ ಗುಲಾಮಗಿರಿಯಲ್ಲಿಡುವ ಕಾಂಗ್ರೆಸ್ಸಾಗಲಿ, ಜಾತಿ-ಮತ ಮೌಢ್ಯಗಳನ್ನು ಬಿತ್ತುತ್ತ ಬಾಯಲ್ಲಿ ರಾಷ್ಟ್ರಪ್ರೇಮದ ಹುಸಿಯನ್ನು ಬಂಡವಾಳ ಮಾಡಿಕೊಂಡು ಜನತೆಯನ್ನು ತಪ್ಪು ದಾರಿಗೆಳೆಯುತ್ತಿರುವ ಬಿ.ಜೆ.ಪಿ.ಗಾಗಲಿ ದಲಿತರ ಮತ ಸಲ್ಲುವುದಿಲ್ಲ.

ಬಂಡವಾಳಶಾಹಿ ಕಾಂಗ್ರೆಸ್ಸಿಯ ಇನ್ನೊಂದು ಮುಖವಾಗಿರುವ ಜನತಾ ಪಕ್ಷ ತನ್ನ ಅಧಿಕಾರಾವಧಿಯಲ್ಲಿ ಭೂ ಸರಭರಾಜು, ಸುಳ್ಳು ಜಾತಿ ಸರ್ಟಿಫಿಕೇಟ್, ಸರ್ಕಾರಿ ನೌಕರರ ವಯೋಮಿತಿ ಏರಿಕೆಯಂಥ ವಿಷಯಗಳಲ್ಲಿ ತನ್ನ ದಲಿತವಿರೋಧಿ ಧೋರಣೆಯನ್ನು ಪ್ರಕಟಿಸಿದೆ. ಕಾಂಗ್ರೆಸ್ಸಿನಂತೆಯೇ ಇದೂ ಜಾತಿವಾದಿ ಭೂ ಮಾಲೀಕರ ಹಿಡಿತದಲ್ಲೇ ಇದೆ.

ಇಷ್ಟಾದರೂ, ಸಮಿತಿ ಆಶಿಸಿರುವಂಥ, ಕೆಳ ಜಾತಿ-ಕೆಳ ವರ್ಗಗಳ ನಾಯಕತ್ವದ, ಸಮಾಜವಾದಿ ಚಿಂತನೆಯ ಮೂರನೆಯ ರಾಜಕೀಯ ಪಕ್ಷ ಇನ್ನೂ ಹುಟ್ಟಿಲ್ಲದ ಈ ಅಸಹಾಯಕ ಪರಿಸ್ಥಿತಿಯಲ್ಲಿ ಜನತಾ-ಕಮ್ಯುನಿಸ್ಟ್ ಬಣವನ್ನು ಬೆಂಬಲಿಸುವುದು ದಲಿತ ಸಂಘರ್ಷ ಸಮಿತಿಗೆ ಅನಿವಾರ್ಯವಾಗಿದೆ.

ಯಾವುದೇ ಏಕಪಕ್ಷೀಯ ಆಡಳಿತ ದಾರಿ ಮಾಡಿಕೊಡುವ ಸರ್ವಾಧಿಕಾರ ದಲಿತ ವಿರೋಧಿಯಾದ್ದರಿಂದ ಕಾಂಗ್ರೆಸ್ಸಿನ ಬಲಿಷ್ಠ ಕೇಂದ್ರದ ವಿರುದ್ಧ, ವಿಕೇಂದ್ರೀಕರಣ, ಆಂತರಿಕ ಪ್ರಜಾಪ್ರಭುತ್ವ, ಲೋಕಾಯುಕ್ತಗಳತ್ತ ಹೆಜ್ಜೆ ಇಟ್ಟಿರುವ ಜನತಾ ಪಕ್ಷ-ಕಮ್ಯುನಿಸ್ಟ್ ಬಣಕ್ಕೆ ಪ್ರಸ್ತುತ ದಲಿತ ಸಂಘರ್ಷ ಸಮಿತಿ ಬೆಂಬಲ ಕೊಡುವ ನಿಲುವು ತಾಳಬೇಕಾಗಿ ಬಂದಿದೆ.

ರಾಜ್ಯ ಸಮಿತಿ ಆದೇಶದಂತೆ ಜನತಾ-ಕಮ್ಯುನಿಸ್ಟ್ ಬಣಕ್ಕೆ ಮತ ನೀಡಲು ಜಿಲ್ಲಾ ಸಮಿತಿ ದಲಿತರಲ್ಲಿ ವಿನಂತಿಸುತ್ತದೆ.

ಎಂ. ಡಿ. ಗಂಗಯ್ಯ,
ಜಿಲ್ಲಾ ಸಂಚಾಲಕರು,
ಕ. ದ. ಸಂ. ಸ., ಚಿಕ್ಕಮಗಳೂರು.

### ಈ ಸಲದ ಯುವಜನ ಮೇಳ: ಒಂದು ಪ್ರತಿಕ್ರಿಯೆ

ಮಾನ್ಯರೆ,

ಈ ಬಾರಿ ಮೇಗೂರಿನಲ್ಲಿ ನಡೆದ ಕೊಪ್ಪ ತಾ॥ ಯುವಜನ ಮೇಳದ ದಿನಗಳಲ್ಲೇ ಬಸರಿಕಟ್ಟೆಯ ವಾರ್ಷಿಕ ರಥೋತ್ಸವ ಜಾತ್ರೆಯೂ ಇದ್ದು, ನಮ್ಮ ಹಲವು ಯುವಕ ಸಂಘಗಳ ಸದಸ್ಯರುಗಳು ಜಾತ್ರೆಸಮಿತಿಯ ಸದಸ್ಯರು ಮತ್ತು ಸಕ್ರಿಯ ಕಾರ್ಯಕರ್ತರುಗಳಾಗಿದ್ದರು. ಈ ಜಾತ್ರೆ ಈ ಭಾಗದ ಜನತೆಯ ಕುಲದೇವತೆ ಜಾತ್ರೆಯಾಗಿದ್ದು ನಮಗೆಲ್ಲ ಪ್ರಮುಖವಾಗಿತ್ತು. ಇದರಿಂದಾಗಿ, ಯುವಜನ ಮೇಳದಲ್ಲಿ ಪ್ರತಿವರ್ಷ ಅತ್ಯಂತ ಉತ್ಸಾಹದಿಂದ ಪಾಲ್ಗೊಳ್ಳುತ್ತಿದ್ದ ನಮ್ಮ ಭಾಗದ ಐದಾರು ತಂಡಗಳು ಈ ಸಲ ಭಾಗವಹಿಸಲು ಆಗುವಂತಿರಲಿಲ್ಲ. ಮೇಳದ ದಿನಾಂಕ ಬದಲಿಸಲು ಅಧಿಕಾರಿಗಳನ್ನು ನಾವು ಕೋರಿದ್ದು ಪ್ರಯೋಜನವಾಗಲಿಲ್ಲ.

ಇನ್ನು ಮುಂದಾದರೂ ಅಧಿಕಾರಿಗಳು ಮೇಳದ ದಿನ ನಿಗದಿ ಮಾಡುವಾಗ ಆಯಾ ಪ್ರದೇಶದಲ್ಲಿನ ಇಂಥ ಪರಿಸ್ಥಿತಿಯನ್ನು ಗಣನೆಗೆ ತೆಗೆದುಕೊಂಡು, ಹೀಗೆ ಹಲವು ಸ್ಥಳೀಯ ತಂಡಗಳು ಮೇಳದಿಂದ ವಂಚಿತವಾಗುವುದನ್ನು ತಪ್ಪಿಸಲೆಂದು ಆಶಿಸುತ್ತೇನೆ.

**ನೊಂದ ಯುವಕ ಸಂಘಗಳ ಸದಸ್ಯರು,**
ಕಲ್ಲುಗುಡ್ಡೆ.

# "ಕಾಫಿ ಬೆಳೆಗಾರರ ಕೊರಳಿಗೆ ಉರುಳು"

ಜಯಪುರ: ಕಾಫಿ ಬೆಳೆಗಾರರ ಕೊರಳಿಗೆ ಸರ್ಕಾರ ಉರುಳು ಹಾಕಿ ಹಿಡಿದುಕೊಂಡಿದೆಯೆಂದು ಕಾಫಿ ಬೆಳೆಗಾರರಾದ ಪಿ. ಜಿ. ಗುರ್ಜರ್ ಇಲ್ಲಿ ಹೇಳಿದರು.

ಫೆ.17 ರಂದು ಇಲ್ಲಿನ ಸಹ್ಯಾದ್ರಿ ಕಾಫಿ ಬೆಳೆಗಾರರ ಸಂಘದ ಆಶ್ರಯದಲ್ಲಿ ನಡೆದ ಕಾಫಿ ವಿಸ್ತರಣಾ ಸಹಾಯಧನ ವಿತರಣೆ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಅವರು, ಕಾಫಿಯನ್ನು ಕಾಫಿ ಮಂಡಳಿಯ ಡಿಪೋದಲ್ಲೇ ಮಾರಬೇಕೆಂಬ ನಿಯಮವನ್ನು ಬೆಳೆಗಾರರ ಕೊರಳಿಗೆ ಒಂದು ಉರುಳು ಎಂದು ವರ್ಣಿಸಿದರು.

ಹೀಗೆ ಮಾರುವುದರಿಂದ ಬೆಳೆಗಾರರಿಗೆ ನ್ಯಾಯವಾದ ಬೆಲೆ ಸಿಗುತ್ತಿದೆಯೆಂಬ ತಿಳುವಳಿಕೆ ಸಾರ್ವತ್ರಿಕವಾಗಿದೆ. ಆದರೆ ಅದಕ್ಕಿಂತ ಮುಖ್ಯವಾಗಿ ಸರ್ಕಾರ ಮನಸ್ವಿಯಾಗಿ ತೆರಿಗೆ ವಿಧಿಸಿ ಅದರ ಒಂದು ಪೈಸೆಯನ್ನೂ ಬಿಡದೆ ವಸೂಲು ಮಾಡಲು ಈ ವ್ಯವಸ್ಥೆ ಸಹಾಯಕವಾಗಿದೆಯೆಂದರು.

**'ಮಧ್ಯವರ್ತಿ' ಸರ್ಕಾರ**

ಕಾಫಿಯ ಗ್ರಾಹಕರ ಬೆಲೆ ಹೆಚ್ಚಾಗಿದೆ. ಆದರೆ ಬೆಳೆಗಾರನಿಗೆ ಬಹು ಕಡಿಮೆ ಬೆಲೆ ಸಿಗುತ್ತಿದೆ. ಇಲ್ಲಿ ನಿಜವಾದ ಮಧ್ಯವರ್ತಿ ಸರ್ಕಾರವೇ ಆಗಿದೆ. ಎಕರೆಗೆ 2800.00 ರೂ. ತೆರಿಗೆಯಲ್ಲದೆ, ಶೇ. 4 ರ ಖರೀದಿ ತೆರಿಗೆ, ಪ್ರತೀ ಟನ್ನಿಗೆ 7200.00 ರೂಪಾಯಿ ರಫ್ತು ತೆರಿಗೆ ಮುಂತಾಗಿ ಮಿತಿಯಿಲ್ಲದ ಲೆಕ್ಕವಿಲ್ಲದಷ್ಟು ತೆರಿಗೆಗಳಿಂದ ಸರ್ಕಾರ ಬೆಳೆಗಾರನನ್ನು ಹಿಂಡುತ್ತಿದೆ. ಕಾಫಿಯಿಂದ ದೇಶಕ್ಕೆ ವರ್ಷಕ್ಕೆ 180 ಕೋಟಿ ರೂ. ವಿದೇಶಿ ವಿನಿಮಯ ಲಭಿಸುತ್ತಿದೆ. ಆದರೆ ಕಾಫಿಯ ಬೆಲೆ ಮಾತ್ರ 1977 ರಲ್ಲಿದ್ದಷ್ಟೇ ಅಥವಾ ಅದಕ್ಕಿಂತಲೂ ಒಂದಂಶ ಕಡಿಮೆಯೇ ಇದೆ. ಬ್ಯಾಂಕಿನಿಂದ ಶೇ. 18 ರಂತೆ ಸಾಲ ತಂದು, ಬೆಳೆಗಾಗಿ 18 ತಿಂಗಳು ಕಾದು ಇಷ್ಟೆಲ್ಲಾ ಪೂರೈಸುತ್ತಿಲ್ಲ ಎಂದು ಅವರು ವಿವರಿಸಿದರು.

(4ನೇ ಪುಟಕ್ಕೆ)

# ಚುನಾವಣೆ: ಕೆಲವು ವಿವರಗಳು

(2ನೇ ಪುಟದಿಂದ)

ಸಿಬ್ಬಂದಿಗಾಗಿ ತರಬೇತಿ ತರಗತಿಗಳನ್ನು ನ.ರಾ. ಪುರದಲ್ಲಿ ಫೆ. 25, ಕೊಪ್ಪದಲ್ಲಿ ಫೆ. 26 ಮತ್ತು ಶೃಂಗೇರಿಯಲ್ಲಿ ಫೆ. 27 ರಂದು ನಡೆಸಲಾಗುತ್ತದೆ. ಅಭ್ಯರ್ಥಿಗಳೂ ಇದರಲ್ಲಿ ಭಾಗವಹಿಸಬಹುದು.

**ಬಂದೋಬಸ್ತ್**

ಪ್ರತಿ ಮತಗಟ್ಟೆಗೆ ಒಬ್ಬ ಪೋಲೀಸ್ ಇದ್ದು, ಸೂಕ್ಷ್ಮವಾದ ಸ್ಥಳಗಳಲ್ಲಿ ಹೆಚ್ಚುವರಿ ಒಬ್ಬ ಹೆಡ್ ಕಾನ್‌ಸ್ಟೇಬಲ್ ಇರುತ್ತಾರೆ. ಸುಮಾರು 30 ಸಂಚಾರಿ ಪೋಲೀಸ್ ಪಡೆಗಳಿದ್ದು ಪ್ರತಿ ಮತಗಟ್ಟೆಗೂ ದಿನವಲ್ಲಿ 2 ಸಲವಾದರೂ ಭೇಟಿ ಕೊಡುತ್ತವೆ.

**ನೀತಿ ಸಂಹಿತೆ**

ಈ ವಿವರಗಳನ್ನು ಚುನಾವಣಾಧಿಕಾರಿಗಳು ಫೆ. 16 ರಂದು ತಮ್ಮ ಕಚೇರಿಯಲ್ಲಿ ಕರೆದಿದ್ದ ಅಭ್ಯರ್ಥಿಗಳ ಮತ್ತು ಅವರ ಏಜೆಂಟರ ಸಭೆಯಲ್ಲಿ ತಿಳಿಸಿದರು. ಚುನಾವಣಾ ನೀತಿ ನಿಯಮಾವಳಿಗಳನ್ನು ವಿವರಿಸಲು ಮತ್ತು ಅನುಮಾನಗಳನ್ನು ಪರಿಹರಿಸಲು ಈ ಸಭೆ ಕರೆಯಲಾಗಿತ್ತು.

ಚುನಾವಣೆ ಮುಗಿಯುವ ವೇಳೆಯ ಹಿಂದಿನ 48 ಗಂಟೆಗಳ ನಂತರ (ಮಾರ್ಚ್ 3 ರ ಸಂಜೆ 4 ರ ನಂತರ) ಧ್ವನಿವರ್ಧಕ ಬಳಸಿ ಮತ್ತು ಸಭೆ ನಡೆಸಿ ಪ್ರಚಾರ ಮಾಡಕೂಡದು; ಮತಗಟ್ಟೆಯಿಂದ 100 ಗಜಗಳ ಸುತ್ತಳತೆಯಲ್ಲಿ ಯಾವ ರೀತಿಯಲ್ಲೂ ಪ್ರಚಾರ ಮಾಡುವಂತಿಲ್ಲ. ಮನೆ ಮನೆಗೆ ಹೋಗಿ ಪ್ರಚಾರ ಮಾಡುವುದು ಕಾನೂನು ರೀತ್ಯಾ ನಿಷಿದ್ಧವಲ್ಲ ಎಂಬ ಅಂಶ ಚರ್ಚೆಯಿಂದ ಸ್ಪಷ್ಟಪಟ್ಟಿತು.

ಅಭ್ಯರ್ಥಿಗಳಿಗೆ ಒದಗಿಸಿರುವ ಮಾಹಿತಿ ಪತ್ರಗಳಲ್ಲಿರುವಂತೆ ಚುನಾವಣಾ ನೀತಿ ಸಂಹಿತೆಗಳಿಗೆ ಬದ್ಧರಾಗಿ ವರ್ತಿಸಬೇಕೆಂದೂ, ಕಟ್ಟಡ ಮತ್ತು ಗೋಡೆಗಳನ್ನು ಭಿತ್ತಿಪತ್ರ ಅಂಟಿಸುವಿಕೆ, ಬರಹ ಮುಂತಾದವುಗಳಿಂದ ವಿರೂಪಗೊಳಿಸಬಾರದೆಂದೂ, ಯಾವುದೇ ಅಹಿತಕರ ಘಟನೆಗಳಿಗೆ ಅವಕಾಶ ಕೊಡಬಾರದೆಂದೂ ಉಮಾಪತಿ ಪಕ್ಷಗಳು ಮತ್ತು ಉಮೇದುವಾರರಲ್ಲಿ ಮನವಿ ಮಾಡಿದರು.

ಮೃತಪಟ್ಟಿರುವ ಮತದಾರರ ಹೆಸರುಗಳನ್ನು ಪಟ್ಟಿಮಾಡಿ ಕೊಡುವಂತೆಯೂ ಅವರು ತಿಳಿಸಿದರು.

**ಸಬ್ ಇನ್‌ಸ್ಪೆಕ್ಟರ್ ಮನವಿ**

ಉಮೇದುವಾರರು ಹಳ್ಳಿಗಳಿಗೆ ಪ್ರಚಾರಕ್ಕೆ ಹೋಗುವಾಗ ಮುಂಚಿತವಾಗಿ ತಿಳಿಸಿದರೆ ಪೋಲೀಸರ ಹಾಜರಿಯನ್ನು ವ್ಯವಸ್ಥೆ ಮಾಡಲಾಗುತ್ತದೆ. ಆದರೆ ಗಲಾಟೆಗಳೇನಾದರೂ ನಡೆದಲ್ಲಿ, ತುರ್ತಾಗಿ ಬರುವಂತೆ ಪೋಲೀಸರಿಗೆ ಕರೆ ಕಳಿಸಿದರೆ ಹಾಗೆ ವ್ಯವಸ್ಥೆ ಮಾಡುವುದು ಅಸಾಧ್ಯವಾಗಬಹುದು ಎಂದು ಕೊಪ್ಪ ಸಬ್ ಇನ್‌ಸ್ಪೆಕ್ಟರ್ ಶಶಿಕುಮಾರ್ ಸಭೆಯಲ್ಲಿ ತಿಳಿಸಿದರು.

ಅಲ್ಲದೆ ಸಭೆ ನಡೆಸಲು ಒಂದೇ ಸ್ಥಳಕ್ಕಾಗಿ ಬೇರೆ ಬೇರೆ ಅಭ್ಯರ್ಥಿಗಳು ಅನುಮತಿ ಕೋರಿದಲ್ಲಿ "ಮೊದಲು ಬಂದ ಮನವಿಗೆ ಮೊದಲು ಪ್ರಾಶಸ್ತ್ಯ" ನೀತಿಯನ್ನು ಅನುಸರಿಸಲಾಗುವುದು ಎಂದೂ ಅಭ್ಯರ್ಥಿಗಳು ಮತ್ತು ಪಕ್ಷಗಳು ಸಹಕರಿಸಬೇಕೆಂದೂ ಅವರು ಮನವಿ ಮಾಡಿದರು.

# 'ಕಾಮಧೇನು' ಸಗಣಿ ಅನಿಲ ಘಟಕ: ವಿಶೇಷ ಜಿಲ್ಲಾಧಿಕಾರಿಗಳ ಪ್ರತಿಕ್ರಿಯೆ

ಸಾಗರದ ಮಡಸೂರು ರಾಮಚಂದ್ರ ಎಂಬವರು ವಿನ್ಯಾಸಗೊಳಿಸಿ ಯಶಸ್ವಿಯಾಗಿ ಬಳಕೆಗೆ ತಂದಿರುವ ಕಡಿಮೆ ಖರ್ಚಿನ 'ಕಾಮಧೇನು' ಸಗಣಿ ಅನಿಲ ಘಟಕಕ್ಕೆ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯಿಂದ ಇನ್ನೂ ಮಾನ್ಯತೆ ಸಿಕ್ಕಿ ಸಹಾಯಧನ ದೊರೆಯುತ್ತಿಲ್ಲವಾದರೂ ಶಿವಮೊಗ್ಗದ ವಿಶೇಷ ಜಿಲ್ಲಾಧಿಕಾರಿಗಳು ಈ ವರ್ಷ ಪ್ರಾಯೋಗಿಕವಾಗಿ ಸುಮಾರು 30 ಘಟಕಗಳಿಗೆ ತಲಾ 1500 ರೂ. ಸಹಾಯಧನ ಘೋಷಿಸಿರುವುದಾಗಿ ವರದಿಯಾಗಿತ್ತು.

ಈ ವರದಿಯನ್ನೂ, ನಮ್ಮ ಪತ್ರಿಕೆಯಲ್ಲಿ 'ಕಾಮಧೇನು' ಬಗ್ಗೆ ಪ್ರಕಟವಾದ ಸಂಚಿಕೆಯನ್ನೂ ಚಿಕ್ಕಮಗಳೂರು ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ವಿಶೇಷ ಜಿಲ್ಲಾಧಿಕಾರಿಗಳಾದ ಕೆ.ಎಸ್.ಮಂಜುನಾಥ್ ಅವರಿಗೆ ಕಳಿಸಿ, ನಮ್ಮ ಜಿಲ್ಲೆಯಲ್ಲೂ ಇಂಥ ಪ್ರೋತ್ಸಾಹ ಕೊಡಿಸಲು ನಾವು ಸೂಚಿಸಿ 25.1.85 ರಂದು ಪತ್ರ ಬರೆದಿದ್ದೆವು. ಆ ಬಗ್ಗೆ ಅವರಿಂದ ಬಂದ ಪತ್ರದ ಒಕ್ಕಣೆ ಇಲ್ಲಿದೆ:

"ಮಾನ್ಯರೆ, ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ನಿಮ್ಮ 25-1-85 ರ ಪತ್ರ ತಲುಪಿದೆ. ಆದರೆ ಈಗ ಇರುವ ಸರ್ಕಾರದ ಆದೇಶದಂತೆ ಗೋಬರ್ ಗ್ಯಾಸ್ ಅನಿಲ ಯಂತ್ರಗಳಿಗೆ ಮಾತ್ರ ಸಹಾಯಧನ ಬಿಡುಗಡೆ ಮಾಡಲು ಅವಕಾಶವಿರುವುದರಿಂದ, ಯೋಜನಾ ನಿರ್ದೇಶಕರು (ಅನಿಲ), ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಬೆಂಗಳೂರು-ಇವರಿಗೆ ಮೇಲ್ಕಂಡ ವಿಚಾರವನ್ನು ಕುರಿತು ನಿಮ್ಮ ಪತ್ರಿಕೆಯೊಂದಿಗೆ, ವಿವರವಾಗಿ 13.2.85 ರಂದು ವರದಿ ಮಾಡಿ ಸಹಾಯಧನದ ಬಿಡುಗಡೆ ಹಾಗೂ ಸದರಿ ಯಂತ್ರದ ಅಭಿವೃದ್ಧಿ ಬಗ್ಗೆ ಸೂಕ್ತ ಆದೇಶವನ್ನು ಕೋರಿ ಈ ಕಛೇರಿಯಿಂದ ಪತ್ರ ಬರೆಯಲಾಗಿದೆ. ಸರ್ಕಾರದಿಂದ ಆದೇಶ ಬಂದ ನಂತರ ಸದರಿ ಯಂತ್ರದ ಅಭಿವೃದ್ಧಿ ಬಗ್ಗೆ ಕ್ರಮ ತೆಗೆದುಕೊಳ್ಳಲಾಗುವುದಾಗಿ ತಿಳಿಸಬಯಸುತ್ತೇನೆ."

ನಂ: ಹೆಚ್‌ಎ/ಪಿಆರ್/452/84-85

## ಪುರಸಭಾ ಕಾರ್ಯಾಲಯ, ಕೊಪ್ಪ.

# ಟೆಂಡರ್ ಪ್ರಕಟಣೆ

ದಿನಾಂಕ 13 ನೇ ಫೆಬ್ರವರಿ, 1985.

ಕರ್ನಾಟಕ ಲೋಕೋಪಯೋಗಿ ಇಲಾಖೆಯ ನೋಂದಾಯಿತ ಅಂಗೀಕೃತ ಕಂಟ್ರಾಕ್ಟದಾರರಿಂದ ಕೆಳಗೆ ಕೊಡಲಾದ ಕೆಲಸಗಳಿಗಾಗಿ ನಿಗದಿತ ಫಾರಂನಲ್ಲಿ ದ್ವಿಪ್ರತಿಯಲ್ಲಿರುವ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಅವುಗಳನ್ನು ಅಧ್ಯಕ್ಷರು ಯಾ ಮುಖ್ಯಾಧಿಕಾರಿಗಳು ಪುರಸಭೆ ಕೊಪ್ಪ ಇಲ್ಲಿ ದಿನಾಂಕ 28-2-85ರ ಸಂಜೆ 5.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಕಾಂಗಾರಿಗಳಿಗೆ ಟೆಂಡರ್ ಫಾರಂಗಳನ್ನು ಮುಖ್ಯಾಧಿಕಾರಿಗಳು ಪುರಸಭೆ ಕೊಪ್ಪ ಇಲ್ಲಿ ದಿನಾಂಕ 27-2-85ರ ಸಂಜೆ 5 ಗಂಟೆಗಳವರೆಗೆ ರೂ. 2.00 ಪಾವತಿಸಿ ಪಡೆಯಬಹುದು. ಅಂಚೆ ಮೂಲಕ ಬರುವ ಟೆಂಡರು ಫಾರಂ ಪಡೆಯಲು ಇಚ್ಛಿಸುವವರು ದಿನಾಂಕ 25-2-85 ರೊಳಗೆ ಎರಡು ರೂ. ಗಳ ಎಂ. ಓ. ಮಾಡಿ ಸ್ವಂತ ವಿಳಾಸದ ಲಕೋಟೆಯೊಂದಿಗೆ ಕಳುಹಿಸಿದಲ್ಲಿ ಟೆಂಡರ್ ಫಾರಂ ಕಳುಹಿಸಲಾಗುವುದು. ಕೆಲಸಗಳ ಇತರೆ ವಿವರ ಮತ್ತು ಟೆಂಡರ್ ಷರತ್ತುಗಳನ್ನು ಪುರಸಭಾ ಕಾರ್ಯಾಲಯ, ಕೊಪ್ಪ ಇಲ್ಲಿ ಪಡೆಯಬಹುದು.

| ಕ್ರಮ ಸಂಖ್ಯೆ | ಕಾಂಗಾರಿಗಳ ವಿವರ | ಎಸ್ಟಿಮೇಟ್ ನಂ. | ಟೆಂಡರ್ ಕಾಯ್ದಿರಿಸಿದ ಅಂದಾಜು ವೆಚ್ಚ | ಇ.ಎಂ.ಡಿ. | ಕೆಲಸ ಮುಗಿಸಲು ಕಾಲಾವಧಿ |
|---|---|---|---|---|---|
| 1 | ಮಾರ್ಕೆಟ್ ರಸ್ತೆಗೆ ಟಾರ್ ಹಾಕಲು | 1 | 29,000-00 | 725-00 | 2 ತಿಂಗಳು |
| 2 | ಮಾರ್ಕೆಟ್ ರಸ್ತೆಗೆ ಟಾರ್ ಹಾಕಲು | 2 | 22,000-00 | 550-00 | ,, |
| 3 | ಮಾಂಸದ ಅಂಗಡಿ ಹಿಂಭಾಗದ ರಸ್ತೆಗೆ ಟಾರ್ ಹಾಕಲು | 1 | 19,600-00 | 490-00 | ,, |
| 4 | ಬಸ್ಟ್ಯಾಂಡ್ ಆವರಣದಿಂದ ಜೆ.ಎಂ.ಜೆ. ಟಾಕೀಸ್ ಮುಂಭಾಗದಿಂದ ಕೆಸವೆ ರಸ್ತೆಗೆ ಸೇತುವೆವರೆಗೆ ಟಾರ್ ಹಾಕಲು | 1 | 31,200-00 | 780-00 | ,, |
| 5 | ತೆಂಗಿನಕಾಯಿ ಸ್ಟಾಲು ಮುಂಭಾಗದ ರಸ್ತೆಗೆ ಟಾರ್ ಹಾಕಲು | 1 | 11,200-00 | 280-00 | ,, |
| 6 | ಶಂಕರ್ ಗ್ಯಾರೇಜ್ ಪಕ್ಕದ ರಸ್ತೆಗೆ ಟಾರ್ ಹಾಕಲು | 1 | 5,800-00 | 145-00 | ,, |
| 7 | ಹಿರೇಕೆರೆ ಪಂಪ್ ಹೌಸ್‌ಗೆ ಕೊಠಡಿ ಕಟ್ಟಲು | | 15,000-00 | 375-00 | ,, |
| 8 | ಕೆ.ಎಲ್.ಮೂರ್ತಿರಾವ್ ಮನೆ ಹತ್ತಿರ ಡ್ರೈನೇಜ್ ಮಾಡಲು | 1 | 2,720-00 | 68-00 | ,, |
| 9 | ಚಿಕ್ಕಮಗಳೂರು ರಸ್ತೆ ಸೂರ್ಯನಾರಾಯಣರಾವ್ ಮನೆ ಹತ್ತಿರ ಡ್ರೈನೇಜ್ | 1 | 950-00 | 23-75 | ,, |
| 10 | ತಿಲಕ್ ರಸ್ತೆ, ಗೋವಿಂದೇಗೌಡರ ಮನೆಯ ಹಿಂಭಾಗ ಡ್ರೈನೇಜ್ ಮಾಡಲು | 1 | 4,230-00 | 105-75 | ,, |
| 11 | ಪೌರ ಕಾರ್ಮಿಕರ ವಸತಿ ಗೃಹಗಳ ವಾರ್ಷಿಕ ರಿಪೇರಿ | 6 | 2,100-00 | 52-50 | ,, |
| 12 | ಪುರಸಭಾ ಕಛೇರಿ ವಾರ್ಷಿಕ ರಿಪೇರಿ | 1 | 600-00 | 15-00 | ,, |
| 13 | ಆರೋಗ್ಯ ಪರಿವೀಕ್ಷಕರ ವಸತಿಗೃಹದ ವಾರ್ಷಿಕ ರಿಪೇರಿ | 1 | 200-00 | 5-00 | ,, |
| 14 | 13 ಮಳಿಗೆ ವಾರ್ಷಿಕ ರಿಪೇರಿ | 1 | 970-00 | 25-00 | ,, |
| 15 | ಮಾಂಸದ ಅಂಗಡಿ ವಾರ್ಷಿಕ ರಿಪೇರಿ | 1 | 320-00 | 10-00 | ,, |
| 16 | ಮೀನು ಮಾರ್ಕೆಟ್ ವಾರ್ಷಿಕ ರಿಪೇರಿ | 1 | 383-00 | 10-00 | ,, |
| 17 | ಪುರಭವನ ವಾರ್ಷಿಕ ರಿಪೇರಿ | 1 | 1,715-00 | 45-00 | ,, |
| 18 | ನೀರು ಸರಬರಾಜು ಯಂತ್ರಾಲಯ ವಾರ್ಷಿಕ ರಿಪೇರಿ | 1 | 2,800-00 | 70-00 | ,, |
| 19 | ಕಾಳಿದಾಸ ರಸ್ತೆಗೆ ಜಲ್ಲಿ ರಸ್ತೆ ಮಾಡುವುದು | 1 | 7,000-00 | 175-00 | ,, |
| | | 2 | 6,700-00 | 167-50 | ,, |
| | ಒಟ್ಟು | | 1,64,488-00 | | |

(ಸಹಿ)
ಅಧ್ಯಕ್ಷರು,
ಪುರಸಭಾ ಕಾರ್ಯಾಲಯ, ಕೊಪ್ಪ.

(ಸಹಿ)
ಮುಖ್ಯಾಧಿಕಾರಿಗಳು,
ಪುರಸಭಾ ಕಾರ್ಯಾಲಯ, ಕೊಪ್ಪ.

## ಕಾಫಿ ಬೆಳೆಗಾರನ ಕೊರಳಿಗೆ ಉರುಳು

(3ನೇ ಪುಟದಿಂದ)

ಇಂಥ ವಿಪರ್ಯಾಸ, ಮಧ್ಯವರ್ತಿ ಶೋಷಣೆ ತಪ್ಪಿಸಲು ಬೆಳೆಗಾರರು ಒಗ್ಗಟ್ಟಾದ ಪ್ರಯತ್ನ ನಡೆಸಬೇಕೆಂದು, ಸಹ್ಯಾದ್ರಿ ಸಂಘದ ಅಧ್ಯಕ್ಷರೂ ಆಗಿರುವ ಗುರ್ಜರ್ ಕರೆ ಕೊಟ್ಟರು.

ಸಹಾಯಧನದ ಚೆಕ್‌ಗಳನ್ನು ಸಾಂಕೇತಿಕವಾಗಿ 25 ಮಂದಿ ಬೆಳೆಗಾರರಿಗೆ ವಿತರಣೆ ಮಾಡಿದ ಕಾಫಿ ಮಂಡಳಿ ಉಪ ನಿರ್ದೇಶಕ ಎಂ.ಶರೀಫ್ ಅವರು, ವಿಸ್ತರಣಾ ಸಹಾಯಧನದ ನಿಬಂಧನೆಗಳನ್ನು ವಿವರಿಸಿ, ಜಿಲ್ಲೆಗೆ ಈ ವರ್ಷ ಬಂದ 30 ಲಕ್ಷ ರೂ. ಗಳಲ್ಲಿ ಇನ್ನೂ 14 ಲಕ್ಷ ಉಳಿದಿದೆಯೆಂದರು. ಬಾಳೆಹೊನ್ನೂರಿನಲ್ಲಿ ಈಚೆಗೆ ಆರಂಭವಾದಂಥ ಸಂಚಾರಿ ರೊಬಸ್ಟಾ ಹಲ್ಲಿಂಗ್ ಯಂತ್ರವೊಂದನ್ನು ಮುಂದಿನ ವರ್ಷ ಜಯಪುರಕ್ಕೂ ಕೊಡುವ ಭರವಸೆ ನೀಡಿದರು.

### ವಿಚಾರ ಸಂಕಿರಣ

ಸಮಾರಂಭದ ಅಂಗವಾಗಿ ನಡೆದ ವಿಚಾರ ಸಂಕಿರಣದಲ್ಲಿ ಬಾಳೆಹೊನ್ನೂರು ಕಾಫಿ ಸಂಶೋಧನಾ ಕೇಂದ್ರದ ತಜ್ಞ ಸಂಶೋಧಕರಾದ ಪಿ.ಕೆ.ಭಟ್, ಜೆಮ್ಷೆಡ್ ಅಹ್ಮದ್ ಮತ್ತು ಸಿ.ಎಸ್.ಕೃಷ್ಣಪ್ಪ ನಾಯಕ್ ಅವರುಗಳು ಕೀಟ ನಾಶಕಗಳು, ಹೊಸತಳಿಗಳು ಮತ್ತು ಮಣ್ಣು ಪರೀಕ್ಷೆ—ಈ ವಿಷಯಗಳ ಬಗ್ಗೆ ಅತ್ಯುಪಯುಕ್ತ ಮಾಹಿತಿಗಳನ್ನು ನೀಡಿದರು.

ಮೂಡಿಗೆರೆ ಹಿರಿಯ ಕಾಫಿ ಸಂಪರ್ಕಾಧಿಕಾರಿ ಬಿ. ಪಿ. ಬಾಲಕೃಷ್ಣ ಮಾತನಾಡಿ, ಸರ್ಕಾರ ಮತ್ತು ಕಾಫಿ ಮಂಡಳಿ ಕಡೆಯಿಂದ ದೊರೆಯುವ ವಿವಿಧ ಸೌಲಭ್ಯಗಳಾದ ತೀವ್ರ ಬೇಸಾಯ ಸಾಲ, ಪುನಃ ಗಿಡ ನೆಡುವ ಸಾಲ, ಯಂತ್ರೋಪಕರಣಗಳ ಸಾಲ, 25 ಎಕರೆವರೆಗಿನವರಿಗೆ 50,000 ರೂ.ವರೆಗಿನ ಸಾಲದ ಬಡ್ಡಿಯಲ್ಲಿ ರಿಯಾಯ್ತಿ (ಸಹಾಯಧನ), ಬೇರೆ ಬೆಳೆ ಬದಲಿಸಿ ಕಾಫಿ ಬೆಳೆಯಲು ಸಾಲ, ಹೈರ್ ಪರ್ಚೇಸ್‌ನಲ್ಲಿ ಹಲ್ಲರ್‌ಗಳ ನೀಡಿಕೆ ಮುಂತಾದುವುಗಳನ್ನು ಕುರಿತು ಮಾಹಿತಿ ನೀಡಿದರು.

ಹೊಸದಾಗಿ ಬೆಳೆ ಇಡುವಿಕೆ, ರೀಪ್ಲಾಂಟಿಂಗ್ ಅಥವಾ ರೀಕ್ರಾಪಿಂಗ್ ಸಾಲಗಳ ಬಗ್ಗೆ ಬೆಳೆಗಾರರು ಮುಂಚಿತವಾಗಿ ತಿಳಿಸಬೇಕಾಗುತ್ತದೆ. ಅದರ ಬಗ್ಗೆ ವರದಿ ಮಂಡಳಿಗೆ ಬರಬೇಕಾಗುತ್ತದೆ. ಹಾಗೆಯೇ ಮುಂದಿನ ಬೆಳೆಗೆ ತಮಗೆ ಬೇಕಾಗುವ ವಿಧದ ಬೀಜದ ಅಗತ್ಯವನ್ನು ಮುಂಚಿತವಾಗಿಯೇ ನೊಂದಾಯಿಸಬೇಕು ಎಂದು ಅವರು ಸೂಚಿಸಿದರು.

ಸಂಘದ ಕಾರ್ಯದರ್ಶಿ ಕೌಳಿ ಶ್ರೀನಿವಾಸ್ ಸ್ವಾಗತಿಸಿ, ಸಂಘದ ಈವರೆಗಿನ ಚಟುವಟಿಕೆಗಳ ವರದಿ ಮಂಡಿಸಿದರು. ಡಾ|| ಎಸ್. ಆರ್. ಶೆಟ್ಟಿ ವಂದಿಸಿದರು.

## ಕಳೆದು ಸಿಕ್ಕಿದ ಪಾಕೀಟು

ಕೊಪ್ಪ: ಕಳೆದ ವಾರ ಮುಂಜಾವು'ನಲ್ಲಿ ಪ್ರಕಟವಾಗಿದ್ದ 'ಪಾಕೀಟು ಸಿಕ್ಕಿದೆ' ಸುದ್ದಿ ಓದಿ, ಅದನ್ನು ಕಳೆದುಕೊಂಡಿದ್ದವರು ಠಾಣೆಯಿಂದ ಅದನ್ನು ಸೂಕ್ತ ಗುರುತು ಹೇಳಿ ಪಡೆದುಕೊಂಡರೆಂದು ತಿಳಿದುಬಂದಿದೆ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್; ಅಚ್ಚು: ದೀವಟಿಗೆ ಅಚ್ಚು ಕೂಟ, ಕೊಪ್ಪ.